# ಶಾಲಾ ಗ್ರಂಥಾಲಯ   ಭಾಷಾ ಶಿಕ್ಷಣದಲ್ಲಿ ಒಂದು ಸಮೃದ್ಧ ಸಂಪನ್ಮೂಲ

The School Library - a Rich Resource in Language Education

ಉಷಾ ಮುಕುಂದ

ಶಾಲಾ ಗ್ರಂಥಾಲಯವನ್ನು ಶಾಲಾ ಪಠ್ಯಕ್ರಮಕ್ಕೆ ಪ್ರತಿಸ್ಪಂದಿಸುವ, ಶಾಲಾ ಪಠ್ಯಕ್ರಮವನ್ನು ಬೆಂಬಲಿಸುವ ಒಂದು ವಿಭಾಗವೆಂದೇ ಸಾಂಪ್ರದಾಯಿಕವಾಗಿ ನಂಬಿಕೊಂಡು ಬರಲಾಗಿದೆ. ಒಬ್ಬ ಗ್ರಂಥಪಾಲಕನು ವಿಸ್ತಾರವಾದ, ಸೂಕ್ತವಾಗಿ ಆಯ್ಕೆ ಮಾಡಿಕೊಂಡ ಅಧ್ಯಯನ ಸಾಮಗ್ರಿಗಳ ಸಂಗ್ರಹವನ್ನು ಹೊಂದಿರುವುದಲ್ಲದೆ ಗ್ರಂಥಾಲಯದ ಹೊಸದಾದ, ಸೂಕ್ತವಾದ, ಉಪಯುಕ್ತವಾದ ಸಂಪನ್ಮೂಲಗಳ ಕುರಿತು ಬೋಧಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಮಾಹಿತಿ, ತಿಳಿವಳಿಕೆ ನೀಡುವುದು ಸಹ ಗ್ರಂಥಪಾಲಕನ ಹೊಣೆಗಾರಿಕೆಯಾಗಿರುತ್ತದೆ. ಅದೇನೇ ಇರಲಿ, ಪಠ್ಯಕ್ರಮವನ್ನು ಇನ್ನಷ್ಟು ಸಮೃದ್ಧಗೊಳಿಸುವ ಸಂಬಂಧವಾಗಿ ಗ್ರಂಥಾಲಯವು ಕೈಗೊಳ್ಳಬಹುದಾದ ಚಟುವಟಿಕೆಗಳು ಮತ್ತು ಕಾರ್ಯಕ್ರಮಗಳಂತಹ ಮಹತ್ವದ ಆಯಾಮವೊಂದನ್ನು ಗ್ರಂಥಾಲಯಕ್ಕೆ ನಾನು ಸೇರ್ಪಡೆ ಮಾಡಲು ಬಯಸುತ್ತೇನೆ. ಗ್ರಂಥಾಲಯವು ಈ ನಿಟ್ಟಿನಲ್ಲಿ ಕ್ರಿಯಾಶೀಲವಾಗಬೇಕೆಂದರೆ ಕೆಲವು ಸಂಗತಿಗಳನ್ನು ಪರಿಗಣಿಸಬೇಕಾದುದು ಅತ್ಯಗತ್ಯ.

೧. ತಿಳಿವಳಿಕೆಯುಳ್ಳ, ಕ್ರಿಯಾಶೀಲವಾದ ಆಡಳಿತ ಮಂಡಲಿ

೨. ಓರ್ವ ಕ್ರಿಯಾಶೀಲನಾದ, ಬಳಕೆದಾರ ಸ್ನೇಹಿಯಾದ ಗ್ರಂಥಪಾಲಕ

೩. ಕಾಳಜಿಯಿಂದ ತೊಡಗಿಸಿಕೊಳ್ಳಬಲ್ಲ ಉದಾರವಾದ ಬೋಧನಾ ಸಿಬ್ಬಂದಿ

೪. ಜೀವಂತವಾದ, ಆಸಕ್ತಿಯಿಂದ ಪುಟಿಯುವ ವಿದ್ಯಾರ್ಥಿ ಸಮುದಾಯ

ಈ ಎಲ್ಲರೂ ಸಾಮರಸ್ಯಪೂರ್ಣವಾದ ಒಂದು ತಂಡದಂತೆ ಕೆಲಸ ಮಾಡಿದಾಗ ನಾನು ವಿವರಿಸುವ ಮುಕ್ತ ಗ್ರಂಥಾಲಯದ ಕಲ್ಪನೆ ಸಾಕಾರವಾಗುತ್ತದೆ. ಈ ನಾಲ್ಕರಲ್ಲಿ ಯಾವೊಂದೂ ಸಹ ಮತ್ತೊಂದರೊಂದಿಗೆ ಬೆರೆಯದ ಸಂಪೂರ್ಣ ಪ್ರತ್ಯೇಕವಾದ ವಿಭಾಗವಲ್ಲ. ಈ ನಾಲ್ಕರಲ್ಲಿ ಯಾವುದಾದರೂ ಒಂದು ವಿಭಾಗ ಕ್ರಿಯಾಶೀಲವಾದರೂ ಉಳಿದ ಮೂರರಲ್ಲಿ ಅದು ಬದಲಾವಣೆಯನ್ನು ತರಬಲ್ಲದು. ಅಲ್ಲಿಂದಾಚೆಗೆ ಅವರವರ ಚೈತನ್ಯ ಮತ್ತು ಸಂಕಲ್ಪಶಕ್ತಿಗೆ ಬಿಟ್ಟದ್ದು.

ಒಂದು ಶಾಲೆಯಲ್ಲಿ ಭಾಷಾ ಶಿಕ್ಷಣದ ಪ್ರವರ್ಧನೆ ಹಾಗೂ ಬೆಳವಣಿಗೆಯಲ್ಲಿ ಗ್ರಂಥಾಲಯ ಯಾವ ಪಾತ್ರ ವಹಿಸುತ್ತದೆ ಎಂಬುದನ್ನು ಪರಿಶೀಲಿಸೋಣ.

ಎಸ್ಕಿಮೋಗಳಲ್ಲಿ 'ಯುದ್ಧ' ಎಂಬ ಪದವೇ ಇಲ್ಲ:

ಭಾಷೆ ಒಂದು ಕಾರ್ಯನಿರ್ವಹಣಾ ಉಪಕರಣವಂತೆ ಪ್ರಾರಂಭವಾಗಿರಬಹುದು. ಆದರೆ ಎಲ್ಲ ತರಹದ ಅಭಿವ್ಯಕ್ತಿಗಳಿಗೆ ಒಂದು ಸಂಕೀರ್ಣವಾದ, ಸುಸಜ್ಜಿತವಾದ ಉಪಕರಣವಾಗಿ ಅದು ಕಾಲಾಂತರದಲ್ಲಿ ವಿಕಾಸವಾಗುತ್ತ ಬಂದಿದೆ. ಭಾಷೆ ವಿಚಾರಗಳನ್ನು ಸಂವಹಿಸುವ ಮಾಧ್ಯಮವಷ್ಟೇ ಅಲ್ಲ. ಅದು ನಮ್ಮ ಆಲೋಚನೆ, ವೈಚಾರಿಕತೆ ಹಾಗೂ ಸ್ಪಂದನಗಳನ್ನೂ ಸಹ ರೂಪಿಸುತ್ತದೆ. ಸಂಸ್ಕೃತಿ, ಹವ್ಯಾಸಗಳು, ಸಾಮಾಜಿಕ ನಿಯಮಗಳನ್ನು ಅರ್ಥ ಮಾಡಿಕೊಳ್ಳಲು ಅದೊಂದು

ಮಾರ್ಗವಾಗಿದೆ. ಜನಸಮುದಾಯದಲ್ಲಿ ಬೆಳೆಯುವ ವೈವಿಧ್ಯಮಯ ಆಶಯಗಳಿಗೆ ಒಂದು ದರ್ಪಣವಾಗಿದೆ. ಭಾಷೆ ಜೀವಂತವಾಗಿರಬೇಕೆಂದರೆ ಅದನ್ನು ಜನ ಕೇಳಬೇಕಾಗುತ್ತದೆ, ನುಡಿಯಬೇಕಾಗುತ್ತದೆ, ಓದುವ-ಬರೆಯುವ ಕ್ರಿಯೆ ನಿರಂತರವಾಗಿ ನಡೆಯುತ್ತಿರಬೇಕಾಗುತ್ತದೆ. ಭಾಷೆಯನ್ನು ವಿವಿಧ ಹಂತಗಳಲ್ಲಿ ಬಳಸುವುದರಿಂದ, ಅರ್ಥ ಮಾಡಿಕೊಳ್ಳುವುದರಿಂದ, ಆನಂದಿಸುವುದರಿಂದ, ಅನುಮೋದಿಸುವುದರಿಂದ ಭಾಷೆ ಇನ್ನಷ್ಟು ಸದೃಢವಾಗುತ್ತದೆ.

ಪ್ರತಿಯೊಬ್ಬರಿಗೂ ನಿಮ್ಮ ಕಿವಿಗಳನ್ನು ನೀಡಿರಿ, ಕೆಲವರಿಗಷ್ಟೇ ನಿಮ್ಮ ಧ್ವನಿಯನ್ನು ನೀಡಿರಿ:

ವಿದ್ಯಾರ್ಥಿಗಳು ಹಾಗೂ ಬೋಧಕರನ್ನು ತನ್ನತ್ತ ಸೆಳೆಯಬಲ್ಲ ಸಮರ್ಥ ಜ್ಞಾನ ಸಂಪನ್ಮೂಲಗಳ ಸಂಗ್ರಹ ಇರುವುದರ ಜೊತೆಗೆ ಗ್ರಂಥಪಾಲಕನಾದವನು ಲೈಬ್ರರಿ ಅವಧಿಯಲ್ಲಿ (ಗ್ರಂಥಾಲಯ ಅವಧಿಯಲ್ಲಿ) ಪ್ರತಿಯೊಂದು ತರಗತಿಯ ಮಗುವನ್ನೂ ವಾರಕ್ಕೊಮ್ಮೆಯಾದರೂ ಭೇಟಿಯಾಗಬೇಕಾಗುತ್ತದೆ. ಭಾಷಾ ಕಲಿಕೆಯಲ್ಲಿ ಹಲವು ಉಪಕ್ರಮಗಳನ್ನು ಕೈಗೊಳ್ಳಲು ಇದೊಂದು ದಾರಿಯಾಗಬಹುದು.

ಕಥೆ ಹೇಳುವುದು ಮತ್ತು ಕತೆಯನ್ನು ಗಟ್ಟಿಯಾಗಿ ವಾಚಿಸುವುದು ಅತ್ಯಂತ ಜನಪ್ರಿಯವಾದ ಆಲಿಸುವ ಚಟುವಟಿಕೆಯಾಗಿದೆ. ಇದನ್ನು ಒಂದು ಸಮೃದ್ಧ ಅನುಭವವನ್ನಾಗಿ ಮಾಡಬೇಕೆಂದರೆ ಅಗಾಧ ಪ್ರಮಾಣದ ಓದುವ ಸಾಮಗ್ರಿ ಹೊಂದಿರಬೇಕಾದುದು ಅತ್ಯಗತ್ಯ.

೧. ಪುರಾಣೇತಿಹಾಸಗಳ ಭಾಗಗಳನ್ನು ಓದುವುದರಿಂದ ಚಿಕ್ಕ ಮಕ್ಕಳಿಗೆ ಅಮೂಲ್ಯವಾದ ಪ್ರಯೋಜನವಾಗುತ್ತದೆ. ಅಂತಹ ಮಗು ಇತಿಹಾಸ, ಪರಂಪರೆ, ಒಂದು ಸಂಸ್ಕೃತಿಯ ನೈಸರ್ಗಿಕ ಸಂಪತ್ತನ್ನು ಕುರಿತು ಪರ್ಯಾಲೋಚಿಸಬಲ್ಲ ಭಾಷೆಯೊಂದಿಗೆ ಸಂಪರ್ಕ ಹೊಂದುತ್ತದೆ.

೨. ಎಲ್ಲ ಭಾಷೆಗಳ ಪ್ರಸಿದ್ಧ ಅಭಿಜಾತ ಕತೆಗಳ ವಾಚನದಿಂದಾಗಿ ಮಕ್ಕಳು ಬೆಳೆದಂತೆ ಇನ್ನೂ ಹೆಚ್ಚು ಹೆಚ್ಚು ಓದುವಂತೆ ಅವರ ಓದಿನ ಅಭಿರುಚಿಗೆ ಒಂದು ಅಡಿಪಾಯ ಹಾಕಿದಂತಾಗುತ್ತದೆ.

೩. ಮೊದಲು ಸಣ್ಣ ಕತೆಗಳನ್ನು ಓದಬೇಕಾಗುತ್ತದೆ. ತದನಂತರ ಸುದೀರ್ಘವಾದ ಕತೆಗಳನ್ನು ಓದಲು ದಾರಿಯಾಗುತ್ತದೆ. ಒಂದೊಂದು ವಿಷಯ-ಪ್ರಕಾರಗಳಿಗೂ ಅದಕ್ಕೆ ಅನುಗುಣವಾದ ವಿವಿಧ ಭಾಷಾ ಬಳಕೆಯ ಕುರಿತಾದ ತಿಳಿವಳಿಕೆ ಮೂಡುತ್ತದೆ. ಭಾಷೆಯನ್ನು ಮಿತವಾಗಿ, ಪರಿಣಾಮಕಾರಿಯಾಗಿ ಬಳಸುವುದರಲ್ಲಿ ಬರೆಹಗಾರನ ಕೌಶಲ್ಯವಿದೆ. ಹೀಗೆ ಬರೆಯುವವನು ತನ್ನನ್ನು ಪೂರ್ತಿಯಾಗಿ ಅಭಿವ್ಯಕ್ತಿಸಿಕೊಳ್ಳಲೂ ಬೇಕಾಗುತ್ತದೆ. ಈ ಒಟ್ಟು ಕ್ರಿಯೆಯಲ್ಲಿ ಬರೆಹಗಾರ ಭಾಷೆಯ ವಿಲಾಸ ಮತ್ತು ಸೂಕ್ಷ್ಮತೆಗಳನ್ನು ಪರಿಚಯಿಸಬೇಕಾಗುತ್ತದೆ.

೪. ವಿವಿಧ ಆಶಯಗಳುಳ್ಳ ಕತೆಗಳ ಪರಿಚಯವಾದಾಗ ಮಕ್ಕಳಿಗೆ ಭಾಷೆಯ ವರ್ಣನಾತ್ಮಕ, ನಿರೂಪಣಾತ್ಮಕ, ಸಂವಾದಾತ್ಮಕ ಶೈಲಿಗಳ ಪರಿಚಯವಾಗಲು ಅವಕಾಶವಾಗುತ್ತದೆ.

೫. ಕಾವ್ಯದ ಭಾಷೆಯನ್ನು ಕೇಳುವ ಅವಕಾಶ ನೀಡುವುದು ಮಗುವಿಗೆ ಭಾಷೆಯನ್ನು ಪರಿಚಯಿಸುವ ಅತ್ಯುತ್ತಮ ಮಾರ್ಗವಾಗಿದೆ. ಇದರಿಂದ ಮಗುವಿಗೆ ಭಾಷೆಯ ಬಂಧ ಹಾಗೂ ವೈಚಾರಿಕ ಕ್ಷಮತೆಯ ಪರಿಚಯವಾಗುತ್ತದೆ. ಜೊತೆಗೆ ಭಾಷೆ ಅತ್ಯಂತ ಖಾಸಗಿಯಾದುದನ್ನೂ ಹೇಳಬಲ್ಲ ಮಾಧ್ಯಮವೆಂದು ತಿಳಿಯುತ್ತದೆ.

೬. ಮಕ್ಕಳಿಗೆ ಓದುವ ತಾಲೀಮನ್ನು ನಡೆಸುವಾಗ ನಾನ್-ಫಿಕ್ಷನ್ (ಸೃಜನೇತರ) ಬರವಣಿಗೆಗಳನ್ನು ಓದಿಸಬೇಕೆಂಬುದು ಬಹುತೇಕ ಸಲ ಮರೆತೇ ಹೋಗುತ್ತದೆ. ಮಾಹಿತಿ ನೀಡಲು, ಚರ್ಚಿಸಲು, ವಾದಿಸಲು, ಮನವರಿಕೆ ಮಾಡಿಸಲು, ಸ್ಫೂರ್ತಿ ತುಂಬಲು, ನಗಿಸಲು ಭಾಷೆಯನ್ನು ಎಷ್ಟು ಪರಿಣಾಮಕಾರಿಯಾಗಿ ಬಳಸಬಹುದು ಎಂಬುದು ಮಗುವಿಗೆ ಇಂತಹ ಬರವಣಿಗೆಗಳನ್ನು ಓದಿದಾಗ ತಿಳಿಯುತ್ತದೆ.

ಪ್ರೌಢ ತರಗತಿಯವರೆಗೂ ಓದುವಿಕೆಯ ಈ ಎಲ್ಲಾ ಉದಾಹರಣೆಗಳನ್ನು ವಿಸ್ತರಿಸಬಹುದಾಗಿದೆ. ಈ ರೀತಿ, ಭಾಷಾ ಕಲಿಕೆ ಇನ್ನಷ್ಟು ಸೂಕ್ಷ್ಮವಾಗುತ್ತದೆ, ಇನ್ನಷ್ಟು ಗಹನವಾಗುತ್ತದೆ. ಆ ಮೂಲಕ ಮಾತನಾಡುವಿಕೆ, ಓದುವಿಕೆ, ಬರೆಯುವಿಕೆ ಇವೇ ಮುಂತಾದ ಭಾಷೆಯ ಇತರ ಅಗತ್ಯತೆಗಳಿಗೂ ಮಕ್ಕಳನ್ನು ಸಜ್ಜುಗೊಳಿಸುತ್ತದೆ.

ಈಗ ಮಾತನಾಡಿರಿ ಅಥವಾ ಶಾಶ್ವತವಾಗಿ ನಾಲಗೆಯನ್ನು ಬಿಗಿಹಿಡಿದುಕೊಂಡು ಇದ್ದುಬಿಡಿ!:

ನಾಲಗೆಯನ್ನು ಮುಕ್ತವಾಗಿ ಬಿಚ್ಚಿಡಲು ಸಾಧ್ಯವಾದಾಗ ಭಾಷಾ ಕಲಿಕೆ ಒಂದು ಒಳ್ಳೆಯ ಮನರಂಜನೆಯೂ ಆಗಬಹುದು.

೧. ಭಾಷೆಯನ್ನು ಒಂದು ನಿಗೂಢ ಉಪಕರಣವನ್ನಾಗಿ ಬಳಸುವ ಮೂಲಕ ಗ್ರಂಥಾಲಯದಲ್ಲಿ ಗುಪ್ತನಿಧಿಯ ಬೇಟೆ ಸಾಧ್ಯವಾಗಬಹುದು. ಮೊದಲು ಗ್ರಂಥಪಾಲಕನು ಸುಳಿವುಗಳನ್ನು ನೀಡುತ್ತಾನೆ, ಬಳಿಕ ಮಕ್ಕಳು ಆ ಸುಳಿವಿನ ನೆರವಿನಿಂದ ಹುಡುಕಲು ಹೊರಡುತ್ತಾರೆ.

೨. ಕೇವಲ ಒಂದು ಕ್ಷಣ: ಇದು ಒಂದು ಮಾತನಾಡುವ ಆಟವಾಗಿದೆ. ಇಲ್ಲಿ ಒಂದು ನಿಮಿಷದ ಸಿದ್ಧತೆ ನಡೆಸಿಕೊಂಡು ನೀಡಲಾದ ವಿಷಯದ ಬಗ್ಗೆ ಸೂಕ್ಷ್ಮವಾಗಿ, ವ್ಯಾಕರಣಬದ್ಧವಾಗಿ ಒಂದು ನಿಮಿಷದವರೆಗೆ ಮಾತನಾಡಬೇಕಾಗುತ್ತದೆ. ಇಂತಹ ಅಭ್ಯಾಸಗಳಿಂದ ಭಾಷೆಯ ದುರ್ಬಳಕೆಯ ಬಗ್ಗೆ ವಿಶೇಷವಾದ ಜ್ಞಾನ ಸಿಗುತ್ತದೆ.

೩. ಪುಸ್ತಕ ಹರಾಜು: ಇಲ್ಲಿ ಒಂದು ಗುಂಪಿನ ಮಕ್ಕಳು ಇತರರು ಓದಲು ಒಂದು ಪುಸ್ತಕವನ್ನು 'ಮಾರಾಟ' ಮಾಡುತ್ತಾರೆ. ಇದಕ್ಕೆ ಭಾಷೆಯನ್ನು ನಿರರ್ಗಳವಾಗಿ ಮಾತನಾಡುವ ಕೌಶಲ್ಯ, ಜೊತೆಗೆ ಅನ್ಯರಿಗೆ ಮನವರಿಕೆ ಮಾಡಿಸುವ ಸಾಮರ್ಥ್ಯ ಇರಬೇಕಾಗುತ್ತದೆ.

೪. ಈ ಮಾತನಾಡುವ ಆಟಗಳ ಜೊತೆಗೆ ಗ್ರಂಥಾಲಯವು ಪುಸ್ತಕದ ಕುರಿತು ಮಾತನಾಡುವ ಪರಿಕಲ್ಪನೆಯನ್ನೂ ಪರಿಚಯಿಸುತ್ತದೆ. ಪ್ರತಿಯೊಬ್ಬ ವಿದ್ಯಾರ್ಥಿಯೂ ಕನಿಷ್ಠ ಪಕ್ಷ ಒಂದು ಅವಧಿಗೆ ಇದನ್ನು ಮಾಡಬೇಕಾಗುತ್ತದೆ. ಇದು ಪುಸ್ತಕದ ಓದಿನ ಕುರಿತಾದ ಒಂದು ಪ್ರಸ್ತುತಿಯಾಗಿದೆ. ಈ ಪ್ರಸ್ತುತಿಯಲ್ಲಿ ಪುಸ್ತಕದ ಆಶಯ, ಕಥಾಹಂದರ, ಪಾತ್ರ ಚಿತ್ರಣ, ಭಾಷೆ ಶೈಲಿಗಳ ಜೊತೆಗೆ ವೈಯಕ್ತಿಕ ಅಭಿಪ್ರಾಯವೂ ಸಹ ಸೇರಿರುತ್ತದೆ. ಪುಸ್ತಕದ ಒಂದು ಭಾಗವನ್ನು ಓದಲಾಗುವುದು. ಹೀಗೆ ಓದುವ ಮೂಲಕ ಕೇಳುಗನಿಗೆ ಭಾಷೆಯ ನೇರ ಪರಿಣಾಮವನ್ನು ಪರಿಚಯಿಸಲಾಗುವುದು. ಈ ಪ್ರಸ್ತುತಿಯ ಜೊತೆಗೆ ಮತ್ತೊಂದು ಮಹತ್ವದ ಚಟುವಟಿಕೆ ನಡೆಯುತ್ತದೆ. ಈ ಚಟುವಟಿಕೆಯಲ್ಲಿ ಇತರ ವಿದ್ಯಾರ್ಥಿಗಳು ಪ್ರಶ್ನೆ ಕೇಳುತ್ತಾರೆ ಮತ್ತು ಗ್ರಂಥಪಾಲಕನು ಲಿಖಿತ ಶಬ್ದಗಳ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸುತ್ತಾರೆ.

೫. ಕೊನೆಯ ವರ್ಷದಲ್ಲಿ ವಿದ್ಯಾರ್ಥಿಗಳು ತಮ್ಮ ಆಯ್ಕೆಯ ಒಂದು ವಿಷಯದ ಮೇಲೆ ಒಂದು ಪುಟ್ಟ ವಿಚಾರ ಸಂಕಿರಣ ನಡೆಸಬಹುದು. ಇದಕ್ಕೆ ಭಾಷೆಯ ಪ್ರೌಢಿಮೆ, ಸುಸಂಬದ್ಧತೆ ಹಾಗೂ ಕೌಶಲ್ಯಗಳು ಬೇಕಾಗುತ್ತವೆ.

೬. ಶಾಲೆಗೆ ಪುಸ್ತಕಗಳನ್ನು ಆರಿಸಲು ವಿದ್ಯಾರ್ಥಿಗಳನ್ನು ಪುಸ್ತಕದ ಅಂಗಡಿಗಳಿಗೆ, ಪುಸ್ತಕ ಪ್ರದರ್ಶನಗಳಿಗೆ ಕರೆದೊಯ್ಯಲಾಗುವುದು. ಅದಾದ ಮೇಲೆ ಶಾಲೆಯ ಪ್ರಾರ್ಥನಾ ಸಮಯದಲ್ಲಿ ಅವರು ಆ ಪುಸ್ತಕಗಳ ಬಗ್ಗೆ ನಾಲ್ಕು ಮಾತುಗಳನ್ನಾಡುವರು. ತಾವೇಕೆ ಅದನ್ನು ಗ್ರಂಥಾಲಯಕ್ಕಾಗಿ ಆರಿಸಿಕೊಂಡೆವು ಎಂಬುದನ್ನು ವಿವರಿಸುವರು.

೭. ಕೆಲವು ಸಲ ಒಂದು ತರಗತಿ ಅಥವಾ ಒಬ್ಬ ವಿದ್ಯಾರ್ಥಿ ಪ್ರಾರ್ಥನಾ ಸಮಯದಲ್ಲಿ ಓದಲೆಂದು ಗ್ರಂಥಾಲಯದಿಂದ ಒಂದು ಪದ್ಯವನ್ನು ಆಯ್ಕೆ ಮಾಡಿಕೊಳ್ಳುವನು.

೮. ಗ್ರಂಥಾಲಯದ ಮತ್ತೊಂದು ಪ್ರಮುಖ ಚಟುವಟಿಕೆ ನಾಟಕದ ಓದು. ಒಂದು ಗುಂಪು ಒಂದು ನಾಟಕವನ್ನು ಆಯ್ಕೆ ಮಾಡಿಕೊಳ್ಳುವುದು. ಯಾದೃಚ್ಛಿಕವಾಗಿ ಒಂದು ಭಾಗವನ್ನು ಮತ್ತೊಂದು ಗುಂಪಿಗೆ ಒಪ್ಪಿಸಿ ನಿರ್ಗಮಿಸುವುದು. ಅವರಿಗೆ ಆ ಭಾಗ ಯಾವುದೆಂದು ಗೊತ್ತಿದ್ದಲ್ಲಿ, ಆಸ್ಕರ್ ವೈಲ್ಡ್, ಪ್ರೇಮಚಂದ್,

ವಿಲಿಯಂ ಶೇಕ್ಸ್‌ಪಿಯರ್, ಬರ್ನಾಡ್ ಶಾ, ಗಿರೀಶ್ ಕಾರ್ನಾಡ್, ಟಾಮ್ ಸ್ಟಾಪರ್ಡ್ ಮುಂತಾದವರು ಶಾಲೆಯಲ್ಲಿ ಭಾಷಾ ಕಲಿಕೆಯನ್ನು ಸಮೃದ್ಧಗೊಳಿಸಿದ್ದಾರೆ ಎಂದರ್ಥ.

(ಪುಸ್ತಕದ ಪ್ರತಿಗಳು ಇಲ್ಲವಾಗಿ ಹೋಗಬಹುದು. ಆದರೆ ಕೆಲವು ಪುಸ್ತಕಗಳು ತಮ್ಮ ಪಡಿಯಚ್ಚನ್ನು ನಮ್ಮ ಮೇಲೆ ಶಾಶ್ವತವಾಗಿ ಬಿಟ್ಟು ಹೋಗುತ್ತವೆ).

ಹುಷಾರು, ಅವನು ವಿಪರೀತ ಓದುತ್ತಾನೆ!:

ವಿದ್ಯಾರ್ಥಿಗಳು ಮತ್ತು ಬೋಧಕರ ಓದಿನ ಹಸಿವಿಗೆ ಗ್ರಂಥಾಲಯದ ಸಮಸ್ತ ಸಂಪನ್ಮೂಲಗಳೂ ಮುಕ್ತವಾಗಿ ಲಭ್ಯವಿದೆ. ವಿವಿಧ ಬಗೆಯ, ವಿವಿಧ ತಲೆಮಾರಿನ ವಿದ್ಯಾರ್ಥಿಗಳಿಗೆ ಸತತ ಮಾರ್ಗದರ್ಶನ ಮಾಡಲು ಇದೊಂದು ಸುವರ್ಣಾವಕಾಶವಾಗಿದೆ. ಸಣ್ಣಕತೆ, ಕಾದಂಬರಿ, ಅಭಿಜಾತ ಸಾಹಿತ್ಯ, ಆಧುನಿಕ ಬರವಣಿಗೆ, ನಾಟಕ, ಕಾವ್ಯ, ಪ್ರಬಂಧ, ಜೀವನ ಚರಿತ್ರೆ, ಪ್ರವಾಸ ಕಥನ, ಜನಪ್ರಿಯ ವಿಜ್ಞಾನ ಇವೇ ಮುಂತಾದ ಪುಸ್ತಕಗಳನ್ನು ಓದಬಹುದು, ವಿಮರ್ಶಿಸಬಹುದು, ಅವುಗಳ ಕುರಿತು ಚರ್ಚಿಸಬಹುದು. ಹೀಗೆ ಮಾಡುವ ಮೂಲಕ ಭಾಷೆಯ ಸಾಧ್ಯಮಾನವಾದ ಎಲ್ಲ ಬಗೆಯ ಅಭಿವ್ಯಕ್ತಿಗಳ ಕುರಿತು ತಿಳಿಸಬಹುದು.

೧. ದಿನಚರಿ, ನಿಯತಕಾಲಿಕೆ, ಪ್ರವಾಸ ಕಥನ, ಆತ್ಮಕತೆ ಮುಂತಾದ ಪ್ರಕಾರಗಳನ್ನು ಓದಿದಾಗ ವಿದ್ಯಾರ್ಥಿಗಳಿಗೆ ಆಲೋಚನೆ, ವೈಚಾರಿಕತೆಯ ಭಾಷೆಯ ಪರಿಚಯವಾಗುತ್ತದೆ.

೨. ತತ್ವಶಾಸ್ತ್ರ, ಶಿಕ್ಷಣ, ವೈಜ್ಞಾನಿಕ ಅಥವಾ ಆರ್ಥಿಕ ಸಿದ್ಧಾಂತಗಳು, ಐತಿಹಾಸಿಕ ಚಿಂತನೆಗಳನ್ನು ಒಳಗೊಂಡ ಪುಸ್ತಕಗಳನ್ನು ಓದಿದಾಗ ವೈಚಾರಿಕ ಭಾಷೆಯ ಸಂಪರ್ಕಕ್ಕೆ ಬರುತ್ತಾರೆ.

೩. ಓದುವಿಕೆಯ ಮತ್ತೊಂದು ಬಹುಮುಖ್ಯ ಸಂಗತಿಯೆಂದರೆ ಅನುವಾದಗಳ ಓದು. ಈ ಓದಿನಲ್ಲಿ ವಿದ್ಯಾರ್ಥಿಗಳು ವಿವಿಧ ಭಾಷೆಗಳ ಸೂಕ್ಷ್ಮತೆ ಮತ್ತು ಸಂಕೀರ್ಣತೆಗಳನ್ನು ಪರಿಚಯಿಸಿಕೊಳ್ಳುವರು. ಭಾಷೆ ಒಂದು ಜನಾಂಗದ ನೈತಿಕತೆಯೊಂದಿಗೆ ಹೇಗೆ ಕರುಳುಬಳ್ಳಿ ಸಂಬಂಧ ಹೊಂದಿರಬಲ್ಲದು ಎಂಬುದನ್ನು ಅವರು ತಿಳಿಯುವರು. ಐತಿಹಾಸಿಕ ಮೂಲಗಳು ಮತ್ತು ವೈಜ್ಞಾನಿಕ ಕಾದಂಬರಿಗಳ ಮೂಲಕ ವಿದ್ಯಾರ್ಥಿಗಳು ಇತರ ಸಂಸ್ಕೃತಿಗಳ, ಇತರ ಪ್ರದೇಶಗಳ ಕತೆಗಳನ್ನು ಓದಿದಾಗ ಅದುವೆ ಎಲ್ಲೆಕಟ್ಟುಗಳನ್ನು ಭೇದಿಸಿಕೊಂಡು ಹಿರಿದಾದ ಪ್ರಪಂಚಕ್ಕೆ ತೆರೆದುಕೊಳ್ಳುವ ಮೊದಲ ಹೆಜ್ಜೆಯಾಗುತ್ತದೆ.

೪. ಪುಟ್ಟ ಮಕ್ಕಳ ಮಟ್ಟಿಗೆ ಮತ್ತೊಂದು ಆಸಕ್ತಿದಾಯಕ ಚಟುವಟಿಕೆಯೆಂದರೆ ನಿಘಂಟುವಿನ ಅಧ್ಯಯನ. ಭಾಷೆಯ ಕುರಿತಾದ ಮಾಹಿತಿಯ ಒಂದು ನಿಧಿಯೇ ಈ ಪುಸ್ತಕದಲ್ಲಿ ಅಡಕಗೊಂಡಿದೆ ಎಂದು ಮಕ್ಕಳು ಕಂಡುಕೊಳ್ಳುತ್ತಾರೆ. ಧಾತು, ಮೂಲ, ಅರ್ಥ, ಉಚ್ಚಾರಣೆ, ಕಾಗುಣಿತ, ಬಳಕೆ, ಸಮಾನಾರ್ಥಕ, ವ್ಯಾಕರಣಾಂಶ, ಸದ್ಯದ ಸ್ಥಿತಿಗತಿ ಮುಂತಾದ ಎಲ್ಲವೂ ಶಬ್ದಗಳ ಹಿಂದಿನ ಆಕರ್ಷಕ ಕತೆಯನ್ನು ಮಕ್ಕಳಿಗೆ ಹೇಳುತ್ತದೆ.

೫. ಗ್ರಂಥಾಲಯದಲ್ಲಿ ಸುದ್ದಿಪತ್ರಿಕೆ, ನಿಯತಕಾಲಿಕೆ ಮತ್ತು ಜರ್ನಲ್‌ಗಳ ಓದುವಿಕೆಗೆ ವಿಶೇಷ ಪ್ರೋತ್ಸಾಹ ನೀಡಲಾಗುತ್ತದೆ. ಈ ಬರವಣಿಗೆಗಳಲ್ಲಿ ಕಾಣಸಿಗುವ ಭಾಷೆಯಿಂದ ವಿದ್ಯಾರ್ಥಿಗಳಿಗೆ ಬರವಣಿಗೆಯ ವಿವಿಧ ಶೈಲಿಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವುದು.

೬. ಇಂದಿನ ಮಕ್ಕಳಿಗೆ ಇಂಟರ್ನೆಟ್ ಭಾಷೆಯ ಕಲಿಕೆ ಮತ್ತು ಆನ್‌ಲೈನ್ ಓದುವಿಕೆ ಸುಲಭದ್ದಾಗಿದೆ. ಭಾಷೆಯ ಹಲವು ಬಳಕೆಗಳಲ್ಲಿ ಇದೂ ಸಹ ಒಂದು ಎಂಬುದನ್ನು ಅರ್ಥ ಮಾಡಿಕೊಳ್ಳಲು ಗ್ರಂಥಾಲಯ ಅವರಿಗೆ ಸಹಾಯ ಮಾಡಬಹುದು. ಅಂತಹ ಎಲ್ಲ ಸಾಮಗ್ರಿಗಳೂ ಗ್ರಂಥಾಲಯದಲ್ಲಿ ಲಭ್ಯವಿರುತ್ತದೆ.

೭. ಲೇಬಲ್‌ಗಳು, ಪ್ರಕಟಣೆಗಳು, ಸೂಚನೆಗಳು, ವೇಳಾಪಟ್ಟಿಗಳು, ನಕ್ಷೆಗಳು, ಟೆಲಿಫೋನ್ ಪುಸ್ತಕಗಳು ಸಹ ಗ್ರಂಥಾಲಯ ಸಂಗ್ರಹದ ಭಾಗವಾಗಿದ್ದು ಇವುಗಳ ಮೂಲಕವೂ ಸಹ ಭಾಷಾ ಬಳಕೆಯ ಸಾಧ್ಯತೆಗಳನ್ನು ಕಲಿಯಬಹುದಾಗಿದೆ.

ಹಾಗೆಂದು ಕರಾರು ಪತ್ರದಲ್ಲಿ ಬರೆಯಲಾಗಿದೆಯೇ?

ಭಾಷಾ ಶಿಕ್ಷಣದಲ್ಲಿನ ಬರವಣಿಗೆಯ ಪ್ರಕ್ರಿಯೆಯಲ್ಲಿ ಗ್ರಂಥಾಲಯವನ್ನು ಹೇಗೆ ತೊಡಗಿಸಿಕೊಳ್ಳಬಹುದು ಎಂದು ನೀವು ಯೋಚಿಸಬಹುದು.

ಗ್ರಂಥಾಲಯ ಯೋಜನೆಗಳು ಒಂದು ಸುಳಿವಾಗಿದೆ. ಪ್ರತಿ ವರ್ಷವೂ ಪ್ರತಿಯೊಂದು ತರಗತಿಯೂ ಲೈಬ್ರರಿಗೆ ಸಂಬಂಧಿಸಿದ ಒಂದು ಯೋಜನೆಯನ್ನು ಕೈಗೆತ್ತಿಕೊಳ್ಳುತ್ತದೆ. ಒಂದು ಗುಂಪು ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ಸಿದ್ಧಪಡಿಸಿದರೆ ಮತ್ತೊಂದು ಗುಂಪು ಸಂಶೋಧನೆಯಲ್ಲಿ ತೊಡಗುತ್ತದೆ, ಗ್ರಂಥಾಲಯದ ಇತಿಹಾಸ ಬರೆಯುತ್ತದೆ. ಮತ್ತೊಂದು ಗುಂಪು ಗ್ರಂಥಾಲಯ ಬಳಕೆದಾರರ ಸರ್ವೇಕ್ಷಣೆಗೆ ಪ್ರಶ್ನಾವಳಿಯನ್ನು ಸಿದ್ಧಪಡಿಸುತ್ತದೆ. ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡುವವರ ಪುಟ್ಟ ಜೀವನ ಚರಿತ್ರೆಯ ಪುಸ್ತಕವನ್ನು ಬರೆಯುವುದು ಪ್ರಸಿದ್ಧ ಚಟುವಟಿಕೆಗಳಲ್ಲೊಂದಾಗಿದೆ. ಒಬ್ಬ ಚಮ್ಮಾರ, ಒಬ್ಬ ಬಸ್ ಚಾಲಕ, ಒಬ್ಬ ಪೊಲೀಸ್ ಪೇದೆ ಇವೇ ಮುಂತಾದ ಜನಗಳನ್ನು ಈ ಕುರಿತು ಸಂದರ್ಶಿಸಲಾಗುವುದು, ಅವರ ಅಭಿಪ್ರಾಯಗಳನ್ನು ದಾಖಲಿಸಿಕೊಳ್ಳಲಾಗುವುದು. ನೀವೇ ಕಂಡಂತೆ, ಈ ಒಂದೊಂದು ಬರವಣಿಗೆಯಲ್ಲೂ ವಿವಿಧ ಶೈಲಿಗಳಲ್ಲಿ ಭಾಷೆಯನ್ನು ಬಳಸಲಾಗುವುದು ಮತ್ತು ಯೋಜನೆಗೆ ಮುನ್ನ ಅವರು ಮಾಡುವ ಪರಾಮರ್ಶೆ ಹಾಗೂ ಹಿನ್ನೆಲೆಯಲ್ಲಿ ಇವುಗಳ ಕುರಿತಾಗಿ ಅವರ ಅಪ್ರಜ್ಞಾಪೂರ್ವಕವಾದ ಕಲಿಕೆ ನೆರವೇರುವುದು. ಗ್ರಂಥಾಲಯದ ಕುರಿತು ಒಂದು ಸಣ್ಣ ವೀಡಿಯೋ ಫಿಲಂ ಮಾಡುವುದು ಮತ್ತೊಂದು ಯೋಜನೆಯಾಗಿದೆ. ಇದನ್ನು ಮಾಡಲು ಅವರು ಹಸ್ತಪ್ರತಿಯನ್ನು (ಬರಹವನ್ನು) ಸಿದ್ಧಪಡಿಸಿಕೊಳ್ಳಬೇಕಾಗುತ್ತದೆ. ಪುಸ್ತಕ ಪರಾಮರ್ಶೆ, ಗ್ರಂಥಾಲಯದ ಕಾರ್ಯಚಟುವಟಿಕೆಗಳ ಒಂದು ಪಟ್ಟಿಯನ್ನು ಸಿದ್ಧಪಡಿಸುವಿಕೆ, ಆಸಕ್ತಿಕರ ಪುಸ್ತಕಗಳ ಕುರಿತ ಪೋಸ್ಟರ್ ಸಿದ್ಧಪಡಿಸುವಿಕೆ, ಸೂಚನಾ ಫಲಕದ ಬರವಣಿಗೆ ಸಿದ್ಧಪಡಿಸುವಿಕೆ ಇವೇ ಮುಂತಾದವುಗಳು ಇತರೆ ಬರವಣಿಗೆಯ ಕೆಲಸಗಳಾಗಿವೆ.

ಕೆಲವು ಕೊನೆಯ ಪದಗಳು ಮತ್ತು ವಿರಾಮ:

ಇತರೆ ಭಾಷೆಗಳ ಪುಸ್ತಕಗಳನ್ನು ಉದಾಹರಣೆಗಾಗಿ ಸಂಗ್ರಹಿಸುವುದು -ಅವನ್ನು ಶಾಲೆಯಲ್ಲಿ ಬೋಧಿಸದಿದ್ದರೂ ಅಥವಾ ಬಳಸದಿದ್ದರೂ- ಇವು ನಾವು ಗ್ರಂಥಾಲಯದಲ್ಲಿ ಮಾಡಿರುವ ಕೆಲವು ಕೆಲಸಗಳಾಗಿವೆ. ಇವುಗಳನ್ನು ಮಕ್ಕಳಿಗೆ ತೋರಿಸಲಾಗುವುದು. ಭಾಷೆಯನ್ನು ಹೇಗೆಲ್ಲ ವಿಭಿನ್ನ ಬಗೆಯ ಬರವಣಿಗೆಗಳಲ್ಲಿ -ಬಲದಿಂದ ಎಡಕ್ಕೆ, ಮೇಲಿನಿಂದ ಕೆಳಕ್ಕೆ ಮತ್ತು ಸುಂದರವಾಗಿ ಕಾಣುವ ವಿವಿಧ ಬರವಣಿಗೆ- ಬರೆಯಲಾಗುತ್ತದೆ ಎಂಬುದನ್ನು ಮಕ್ಕಳಿಗೆ ಪರಿಚಯಿಸಿದಂತಾಗುತ್ತದೆ.

ಎರಡನೆಯ ಭಾಷೆಯ ಪುಸ್ತಕಗಳನ್ನು ಗ್ರಂಥಾಲಯದ ಮುನ್ನೆಲೆಗೆ ತರುವ ಮೂಲಕ -ಅದರಿಂದ ವಿಂಗಡಣೆಯ ಯೋಜನೆಯ ಉಲ್ಲಂಘನೆಯಾದರೂ- ಗ್ರಂಥಾಲಯವು ಬಳಕೆದಾರರಿಗೆ ಗಟ್ಟಿಯಾದ ಸಂದೇಶವನ್ನು ತಲುಪಿಸಬಲ್ಲದು. ಇದನ್ನು ನಾವು ನಮ್ಮ ಗ್ರಂಥಾಲಯದಲ್ಲಿ ಮಾಡಿದ್ದೇವೆ ಮತ್ತು ಅದರಿಂದ ಒಳ್ಳೆಯ ಫಲಿತಾಂಶ ಬಂದಿದೆ.

ನೀವು ಯಾರೇ ಆಗಿರಿ, ಈ ಜಗತ್ತು (ಭಾಷಾಜಗತ್ತು) ನಿಮ್ಮ ಕಲ್ಪನೆಗೆ ತನ್ನನ್ನು ತಾನು ಒಡ್ಡಿಕೊಳ್ಳುತ್ತದೆ. ಅಡವಿಯ ಹಕ್ಕಿಯಂತೆ ನಿಮ್ಮನ್ನು ಕೂಗಿ ಕರೆಯುತ್ತದೆ ಮೇರಿ ಆಲಿವರ್

ಪರಾಮರ್ಶನ ಗ್ರಂಥಗಳು:


**ಖಜಜಿಜಡಿಜಟಿಛಿಜ:**

**ಟ ಕಿಣಾಂಣಜ ಜಿಡಿಂಟ ರಿಂಜಟ ಛಧಿ ಒಚಿಡಿಧಿ ಔಟುತಜಡಿ ಚಿಟಿಜ ಜಿಡಿಂಟ ರಿಟಚಿಧಿ**

**ಛಧಿ ಘುಟಟುಚಿಟ ಋಚಿಔಭರಿಜಚಿಡಿಜ.**

**ಟ ಇಥಚಿಟರಿಟಜ ಚಿಡಿಜ ಜಿಡಿಂಟ ಣುಜ ಟುಛಡಿಚಿಡಿಧಿ ಚಿಣ ಅಜಟಿಣಡಿಜ ಜಿಂಡಿ**

**ಐಜಚಿಡಿಟುಟಿರ, ಃಚಿಟಿರಚಿಟಂಡಿಜ**


ಉಷಾ ಮುಕುಂದ ಅವರು ೨೫ ವರ್ಷಗಳಿಂದ ಶಾಲಾ ಗ್ರಂಥಾಲಯಗಳ ನಿರ್ವಹಣೆಯಲ್ಲಿ ತೊಡಗಿಕೊಂಡಿದ್ದಾರೆ. ಕೆಎಫ್ಐನ ದಿ ವ್ಯಾಲಿ ಸ್ಕೂಲ್‌ನಲ್ಲಿ ಮತ್ತು ಬೆಂಗಳೂರಿನ ಸೆಂಟರ್ ಫಾರ್

ಲರ್ನಿಂಗ್‌ನಲ್ಲಿ ಅವರು ಮುಕ್ತ ಗ್ರಂಥಾಲಯವನ್ನು ತೆರೆದಿದ್ದಾರೆ. ಗ್ರಂಥಾಲಯಗಳ ಸಮರ್ಥ ಬಳಕೆ ಮತ್ತು ಎಲ್ಲಾ ಯುವ ವಿದ್ಯಾರ್ಥಿಗಳಿಗೆ ಓದುವ ಆನಂದವನ್ನು ಪರಿಚಯಿಸುವುದು ಅವರ ಆದ್ಯತೆಯ ವಿಷಯಗಳಾಗಿವೆ. ಇದನ್ನು ಅವರು ಆಟಗಳು, ಚಟುವಟಿಕೆಗಳು ಮತ್ತು ಕ್ರಿಯಾಯೋಜನೆಗಳ ಮೂಲಕ ನೆರವೇರಿಸಿದ್ದಾರೆ. ಸೆಂಟರ್ ಫಾರ್ ಲರ್ನಿಂಗ್‌ನ ದೈನಂದಿನ ಕಾರ್ಯಚಟುವಟಿಕೆಯಿಂದ ನಿವೃತ್ತಿ ಹೊಂದಿದ ಮೇಲೆ ಗ್ರಂಥಾಲಯಗಳಲ್ಲಿ ಮುಕ್ತ ಗ್ರಂಥಾಲಯಗಳನ್ನು ಸ್ಥಾಪಿಸಲು ಮತ್ತು ಓದುವ ಚಟುವಟಿಕೆಯನ್ನು ಪ್ರವರ್ಧಿಸಲು ಅವರು ಗ್ರಾಮೀಣ ಹಾಗೂ ನಗರ ಪ್ರದೇಶಗಳಿಗೆ ಭೇಟಿ ನೀಡುತ್ತಿರುತ್ತಾರೆ. ಅವರನ್ನು ಇಲ್ಲಿ ಸಂಪರ್ಕಿಸಬಹುದು: ***ಈುಚಿ.ಟಣಾಣಟಿಜಚಿ@ರಟಚುಟ.ಛಿಂಟ***